

# ಕರ್ನಾಟಕ ಸರ್ಕಾರ
# ಕರ್ನಾಟಕ ವಿಧಾನ ಪರಿಷತ್ತು
# 146ನೇ ಮುಂದುವರೆದ ಅಧಿವೇಶನ-2022

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1462(1716) |
| ಮಾನ್ಯ ಸದಸ್ಯರ ಹೆಸರು | : | ಡಾ: ವೈ.ಎ. ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ಸಚಿವರು | : | ಮಾನ್ಯ ಉನ್ನತ ಶಿಕ್ಷಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 14.03.2022 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ನಿಗದಿತ ಸಮಯಕ್ಕೆ ಫಲಿತಾಂಶ ಬಾರದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| (ಆ) | ಬಂದಿದ್ದಲ್ಲಿ ವಿಳಂಬಕ್ಕೆ ಕಾರಣಗಳೇನು: | ಕೋವಿಡ್ ಮಾರಕ ರೋಗದ ಪ್ರಸರಣೆಯ ಕಾರಣದಿಂದ ಲಾಕ್‌ಡೌನ್ ಹಾಗೂ ರಜೆ ಘೋಷಿಸಲಾದ ಕಾರಣ 2021ನೇ ಸಾಲಿನ ಅವಧಿಯ 5 ನೇ ಸೆಮಿಸ್ಟರ್ ಪರೀಕ್ಷೆಗಳನ್ನು 18.03.2021 ರಿಂದ 07.04.2021ರವರೆಗೆ, 1ನೇ ಮತ್ತು 3ನೇ ಸೆಮಿಸ್ಟರ್ ಪರೀಕ್ಷೆಗಳನ್ನು ದಿನಾಂಕ:10.08.2021 ರಿಂದ ದಿನಾಂಕ:04.09.2021 ರವರೆಗೆ ಹಾಗೂ 2ನೇ, 4ನೇ ಮತ್ತು 6ನೇ ಸೆಮಿಸ್ಟರ್ ಪರೀಕ್ಷೆಗಳನ್ನು ದಿನಾಂಕ:29.09.2021 ರಿಂದ ದಿನಾಂಕ:30.10.2021 ರವರೆಗೆ ನಡೆಸಿ, ವಿದ್ಯಾರ್ಥಿಗಳಿಗೆ ತೊಂದರೆಯಾಗದ ರೀತಿಯಲ್ಲಿ ಫಲಿತಾಂಶಗಳನ್ನು ನಿಗದಿತ ಕಾಲಮಿತಿಯೊಳಗಾಗಿ ಪ್ರಕಟಿಸಲಾಗಿದೆ.<br><br>ದಿನಾಂಕ:24.03.2021 ರಿಂದ 15.04.2021ರ ಅವಧಿಯಲ್ಲಿ ನಡೆಸಲಾದ ಮುಕ್ತ ಹಾಗೂ ದೂರ ಶಿಕ್ಷಣದ ಸ್ನಾತ್ತಕ ಕೋರ್ಸುಗಳ ಪರೀಕ್ಷೆಗಳ ಮೌಲ್ಯಮಾಪನವನ್ನು ಲಾಕ್‌ಡೌನ ಅವಧಿ ಮುಕ್ತಾಯಗೊಂಡ ನಂತರ ನಡೆಸಿ, ಫಲಿತಾಂಶಗಳನ್ನು ಕಾಲಬದ್ಧವಾಗಿ ಪ್ರಕಟಿಸಲಾಗಿದೆ. ಆದರೆ, ಸ್ನಾತ್ತಕೋತ್ತರ ಪದವಿ ಪರೀಕ್ಷೆಗಳನ್ನು ಬೆಂಗಳೂರು ವಿಶ್ವವಿದ್ಯಾಲಯದ ವಿನಿಯಮಗಳ ಪ್ರಕಾರ ಇಬ್ಬರು ಮೌಲ್ಯಮಾಪಕರಿಂದ ದ್ವಿ-ಮೌಲ್ಯಮಾಪನಕ್ಕೆ |

| | | |
|---|---|---|
| | | (Double Valuation) ಒಳಪಡಿಸಬೇಕಾಗುತ್ತದೆ. ಕೋವಿಡ್ ಪ್ರಸರಣೆ ಹಾಗೂ ಇತರೆ ಅನಿವಾರ್ಯ ಕಾರಣಗಳಿಂದಾಗಿ ಎದುರಾದ ಹತೋಟಿಗೆ ಮೀರಿದ ಸನ್ನಿವೇಶಗಳಿಂದಾಗಿ ಅನ್ಯ ವಿಶ್ವವಿದ್ಯಾಲಯಗಳ ಮೌಲ್ಯಮಾಪಕರು ಮೌಲ್ಯಮಾಪನ ಪ್ರಕ್ರಿಯೆಲ್ಲಿ ತೊಡಗಿಸಿಕೊಳ್ಳಲು ತಡವಾದ ಹಿನ್ನೆಲೆಯಲ್ಲಿ ಫಲಿತಾಂಶ ಪ್ರಕಟಿಸಲು ಅಲ್ಪ ವಿಳಂಬವಾಗಿದ್ದರೂ, ವಿದ್ಯಾರ್ಥಿಗಳ ಶೈಕ್ಷಣಿಕ ಹಿತಾಸಕ್ತಿಗೆ ಭಾದಕವಾಗದಂತೆ ವಿಶ್ವವಿದ್ಯಾಲಯದಿಂದ ಕ್ರಮವಹಿಸಲಾಗಿದೆ |
| **(ಇ)** | ಸದರಿ ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಗಳಿಗೆ ನೀಡುವ ಅಂಕಪಟ್ಟಿಯಲ್ಲಿ ಲೋಪದೋಷಗಳಿದ್ದು, ಇದಕ್ಕೆ ಕಾರಣರಾದವರ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು? (ಮಾಹಿತಿ ನೀಡುವುದು) | ವಿದ್ಯಾರ್ಥಿಗಳ ವಿವರಗಳನ್ನು ಅಪ್‌ಲೋಡ್ ಮಾಡುವ ಸಂದರ್ಭದಲ್ಲಿ ಪ್ರಮಾದವಶಾತ್ ಹಾಗೂ ಕಣ್ತಪ್ಪಿನಿಂದ ನೋಂದಣಿ ಸಂಖ್ಯೆ ಹಾಗೂ ಇತರೆ ಕೆಲವು ವಿಷಯಗಳ ನಮೂದನೆಗಳಲ್ಲಿ ಉಂಟಾದ ಉದ್ದೇಶಪೂರ್ವಕವಲ್ಲದ ಲೋಪಗಳನ್ನು ಕೂಡಲೇ ಸರಿಪಡಿಸಿ, ವಿದ್ಯಾರ್ಥಿಗಳಿಗೆ ತೊಂದರೆಯಾಗದಂತೆ ಫಲಿತಾಂಶಗಳನ್ನು ಪ್ರಕಟಿಸಲಾಗಿದೆ. |

**ಸಂಖ್ಯೆ: ಇಡಿ/ 149 /ಯುಬಿವಿ /2022**

**(ಡಾ|| ಅಶ್ವತ್ ನಾರಾಯಣ ಸಿ.ಎನ್.)**
ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ ವಿಜ್ಞಾನ ಮತ್ತು ತಂತ್ರಜ್ಞಾನ,
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಇಲಾಖೆ ಸಚಿವರು.